# ವಿಜ್ಞಾಪನೆ

---

" ಗಂಡುಗೊಡಲಿ " ಎಂಬ ಈ ಏಕಾಂಕ ದೃಶ್ಯವನ್ನು ಸಂಘದಿಂದ ಪ್ರಕಾಶಿಸಲು ಅನುಮತಿಯನ್ನಿತ್ತುದಕ್ಕಾಗಿ ಗ್ರಂಥಕರ್ತರಾದ ಶ್ರೀಮಾನ್ ಜಿ. ಪಿ. ರಾಜರತ್ನಂ, ಎಂ.ಎ., ರವರಿಗೆ ಸಂಘವು ಚಿರ ಋಣಿಯಾಗಿರುತ್ತದೆ. ರಕ್ಷಾಕವಚದ ಮೇಲೆ ಕಾಣುವ ಸೂಚಕ ಚಿತ್ರವನ್ನು ರಚಿಸಿಕೊಟ್ಟುದಲ್ಲದೆ ಈ ಗ್ರಂಥದ ಮುದ್ರಣ ಕಾರ್ಯದಲ್ಲಿ ನಮಗೆ ವಿಶೇಷವಾಗಿ ನೆರವಾದ ಶ್ರೀಯುತ ಎಂ. ವಿ. ಸೀತಾರಾಮಯ್ಯ, ಬಿ.ಎ., ರವರಿಗೆ ನಾವು ಕೃತಜ್ಞರು.

ಸಂಘದಿಂದ ಅಚ್ಚಾದ ಗ್ರಂಥಗಳಲ್ಲಿ ಒಂದನ್ನು ಪ್ರತಿ ವರುಷವೂ ಸಂಘದ ಸದಸ್ಯರಿಗೆ ಉಚಿತವಾಗಿ ಅರ್ಪಿಸಬೇಕೆಂದಿರುವೆವು. ಸಂಘವು ಸ್ಥಾಪಿತವಾದ ಈ ಎರಡು ವರುಷಗಳಲ್ಲಿ ಕ್ರಮವಾಗಿ ಶ್ರೀಮಾನ್ ಪುಟ್ಟಪ್ಪನವರ " ಸಾಹಿತ್ಯ ಪ್ರಚಾರ " ಮತ್ತು ವೇ|| ಪಂಡಿತ ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿಗಳ " ಕನ್ನಡ ಮೇಘ ಸಂದೇಶ "—ಎಂಬ ಎರಡು ಪುಸ್ತಕಗಳನ್ನು ಸದಸ್ಯರಿಗೆ ಅರ್ಪಿಸಿರುವೆವು. ಈ ವರುಷ ಪ್ರಕೃತ ಗ್ರಂಥವನ್ನು ಅದೇ ರೀತಿಯಾಗಿ ಅರ್ಪಿಸಬೇಕೆಂದಿದ್ದೇವೆ. ಸಂಘದ ಸದಸ್ಯರ ಮತ್ತು ಇತರ ಕನ್ನಡಿಗ ಮಹಾಜನರ ಉದಾರಾಶ್ರಯವು ಸಂಘಕ್ಕೆ ಎಂದಿನಂತೆ ದೊರೆಯುವುದೆಂದು ನಂಬಿದ್ದೇವೆ.

ಶಿವಮೊಗ್ಗ,
೮-೧೧-೧೯೩೨.

ಕೂಡಲಿ ಚಿದಂಬರಂ
ಕಾರ್ಯದರ್ಶಿ,
ಕರ್ಣಾಟಕ ಸಂಘ, ಶಿವಮೊಗ್ಗ.

[ಕೃತಯುಗದಲ್ಲಿ ಕ್ಷಾತ್ರಕುಲಜಲಧಿಯನ್ನು ಆಪೋಶನವನ್ನಾಗಿ ತೆಗೆದ ಕ್ರಾಂತಿನಾಥನ ಹೆಗಲನ್ನೇರಿದ ಗಂಡುಗೊಡಲಿಯ ಕೊರಲಗು ಸಾರ್ಥಕವಾದ ಸಮಯದ ದರ್ಶನವಿದು—ಈ ಏಕಾಂಕ ದೃಶ್ಯ.

ಈ ರೂಪಕದಲ್ಲಿ ಅವತರಿಸಿರುವ ಕಲಿಯು ಸುಮಾರು ಒಂದು ವರುಷದ ಹಿಂದೆ ನಮ್ಮ ತಾಯ್ನಾಡ ಇರವನ್ನು ಕಂಡು ಕದಡಿದ್ದ ನನ್ನ ಬಗೆಗೆ ಮೈದೋರಿದ ಕೊಡಲಿಯ ಕಲಿಯು. ಪುರಾಣಪ್ರಸಿದ್ಧನಾದ ಪರಶುರಾಮನ ಪ್ರತಿಬಿಂಬವು ಈ ರೂಪಕದಲ್ಲಿ ರೂಪಭೇದವಿಲ್ಲದೆ ಕಾಣಿಸದಿರಲು ಕಾರಣವನ್ನು ದೂರ ಅರಸಬೇಕಾದುದಿಲ್ಲ, ದರ್ಶನಭೇದಕ್ಕೆ ದೃಷ್ಟಿಭೇದವೂ ದೃಷ್ಟಿವಿಶೇಷಕ್ಕೆ ಮನಸ್ಸಿನ ಪರಿಸ್ಥಿತಿಯೂ ಕಾರಣವೆಂಬ ಸತ್ಯವು ಇಂದಿನದಲ್ಲ ಬಲು ಹಿಂದಿನದು.]

## ಪಾತ್ರಗಳು

ಪರಶುರಾಮ

ವಟುಗಳು

ಜಮದಗ್ನಿ

ರೇಣುಕೆ

ದೂತ

ಕಶ್ಯಪ

# ದೃಶ್ಯ ಒಂದು

[ಜಮದಗ್ನಿಯಾಶ್ರಮದ ಕಾಡಿನಲಿ, ಭಾರ್ಗವನು,
ವೀರಾಸನಸ್ಥಿತನು, ಗಂಡುಗೊಡಲಿಯ ಹಿಡಿದು
ಮಸೆಯುತ್ತ, ಮಸೆತದೆಳೆತಕೆ ತಕ್ಕ ಹಾಡನೊಂ-
ದೆತ್ತಿ ಹೇಳುತಲಿಹನು. ರಾಮನಿರ್ಕೆಲದಲ್ಲಿ
ವೀರಾಸನಾಸೀನ ವಟುಗಳಿರುವರು ಕೆಲರು.
ರಾಮನೆಂದೊಂದು ನುಡಿ ವಟುಗಳಿಗೆ ಮೇಳವದು.
ಮೇಳ ಮೊದಲಾಗುತಿರೆ ಮೇಲೆ ತೆರೆಯೇಳುವುದು.]

**ಪರಶುರಾಮ**

ಮಸೆಯುಲಿ ಕ್ರಾಂತಿಯು ಕ್ರೂರಕುಠಾರಂ!

**ವಟುಗಳು**

ಮಸೆಯುಲಿ ಕ್ರಾಂತಿಯು ಕ್ರೂರಕುಠಾರಂ!

**ಪರಶುರಾಮ**

ನೆಲಸಮವಾಗಲಿ ವೈರಿವಠಾರಂ!

**ವಟುಗಳು**

ನೆಲಸಮವಾಗಲಿ ವೈರಿವಠಾರಂ!

**ಪರಶುರಾಮ**

ನಗೆಯುಸು ಹೊಂದಲಿ ಆಶ್ರಮದಾಸ್ಯಂ!

**ವಟುಗಳು**

ನಗೆಯುಸು ಹೊಂದಲಿ ಆಶ್ರಮದಾಸ್ಯಂ!

**ಪರಶುರಾಮ**

ಇಂದೇ ಮುಗಿಯಲಿ ಹಾಳೀದಾಸ್ಯಂ!

**ವಟುಗಳು**

ಇಂದೇ ಮುಗಿಯಲಿ ಹಾಳೀದಾಸ್ಯಂ !

**ಪರಶುರಾಮ**

ದಬ್ಬಾಳಿಕೆಯಿೂ ಮಾಹಿಷ್ಮತಿಯು

**ವಟುಗಳು**

ದಬ್ಬಾಳಿಕೆಯಿೂ ಮಾಹಿಷ್ಮತಿಯು

**ಪರಶುರಾಮ**

ಅರ್ಜುನನಲ್ಲಿ ಮಿೂರಿದೆ ಮಿತಿಯು ;

**ವಟುಗಳು**

ಅರ್ಜುನನಲ್ಲಿ ಮಿೂರಿದೆ ಮಿತಿಯು ;

**ಪರಶುರಾಮ**

ಮಾನವ ಪ್ರಾಣವ ಕಾಪಿಡಲಾವು

**ವಟುಗಳು**

ಮಾನವ ಪ್ರಾಣವ ಕಾಪಿಡಲಾವು

**ಪರಶುರಾಮ**

ಕ್ರಾಂತಿಯು ತರಬೇಕಿಲ್ಲವೆ ಸಾವು !

**ವಟುಗಳು**

ಕ್ರಾಂತಿಯು ತರಬೇಕಿಲ್ಲವೆ ಸಾವು !

**ಪರಶುರಾಮ**

ಕೃತವೀರನ ಮಗನೆಂಬೀ ಅರಸು

**ವಟುಗಳು**

ಕೃತವೀರನ ಮಗನೆಂಬೀ ಅರಸು

**ಪರಶುರಾಮ**

ನಮ್ಮಾ ಮಾಹಿಷ್ಮತಿಯಲಿ ಹೊರಸು

ದೃಶ್ಯ ಒಂದು

**ವಟುಗಳು**

ನಮ್ಮಾ ಮಾಹಿಷ್ಮತಿಯಲಿ ಹೊರಸು

**ಪರಶುರಾಮ**

ನಾಡಿನ ಪೀಡೆಯ ದೂಡಲಿಕಾವು

**ವಟುಗಳು**

ನಾಡಿನ ಪೀಡೆಯ ದೂಡಲಿಕಾವು

**ಪರಶುರಾಮ**

ಕ್ರಾಂತಿಯ ತರಬೇಕಿಲ್ಲವೆ ಸಾವು !

**ವಟುಗಳು**

ಕ್ರಾಂತಿಯ ತರಬೇಕಿಲ್ಲವೆ ಸಾವು !

[ಮಸೆವ ಕಲ್ಲಿಗೆ ಕೊಂಚ ನೀರು ಚಿಮುಕಿಸಿ ಮತ್ತೆ ಚಕಚಕನೆ ಚುರುಕಿನಿಂದಲಗ ಮಸೆಯುವನು.]

**ಪರಶುರಾಮ**

ಮೂರು ಬೊಟ್ಟು ನೀರು ಬಿಟ್ಟು
ಮಸೆ! ಮಸೆ! ಕೊಡಲಿ ಮಸೆ!

**ವಟುಗಳು**

ಮೂರು ಬೊಟ್ಟು ನೀರು ಬಿಟ್ಟು
ಮಸೆ! ಮಸೆ! ಕೊಡಲಿ ಮಸೆ!

**ಪರಶುರಾಮ**

ಕ್ರಾಂತಿಗೆಂದು ಗಂಡುದೊಟ್ಟು
ಮಸೆ! ಮಸೆ! ಕೊಡಲಿ ಮಸೆ!

**ವಟುಗಳು**

ಕ್ರಾಂತಿಗೆಂದು ಗಂಡುದೊಟ್ಟು
ಮಸೆ! ಮಸೆ! ಕೊಡಲಿ ಮಸೆ!

**ಪರಶುರಾಮ**

ನಾವು ನಾಡಗಂಡರೆಂದು
ಮಸೆ! ಮಸೆ! ಕೊಡಲಿ ಮಸೆ!

**ವಟುಗಳು**

ನಾವು ನಾಡಗಂಡರೆಂದು
ಮಸೆ! ಮಸೆ! ಕೊಡಲಿ ಮಸೆ!

**ಪರಶುರಾಮ**

ನಾಡ ಗುಡಿಯನೆತ್ತಲೆಂದು
ಮಸೆ! ಮಸೆ! ಕೊಡಲಿ ಮಸೆ!

**ವಟುಗಳು**

ನಾಡ ಗುಡಿಯನೆತ್ತಲೆಂದು
ಮಸೆ! ಮಸೆ! ಕೊಡಲಿ ಮಸೆ!

[ಪರಶುವಿನ ತೀಕ್ಷ್ಣತೆಯ ಪರಿಕಿಸುವನು.]

**ವಟುವೊಬ್ಬ**

ಭಾರ್ಗವ! ಏಹೊತ್ತುಮಿೂ ಕ್ರಾಂತಿಯನೆ ನುಡಿವೆ.
ಕಾರಣಮದಾವುದೊ?

**ಪರಶುರಾಮ**

ಏನೆಂದು ಕೇಳುವೆಯ!
ನೀನಿರ್ಪುದೆಲ್ಲಿ?

**ವಟು**

ಜಮದಗ್ನಿಯಾಶ್ರಮದಿ.

**ಪರಶುರಾಮ**

ಜಮದಗ್ನಿಯಾಶ್ರಮದಿ! ನೀನಿರ್ಪುದಲ್ಲಲ್ಲ—
ದಾಸ್ಯದಾವಾಸದಲಿ! ನೀನಿರ್ಪುದಲ್ಲಿ!
ನೀನೊಬ್ಬನಲ್ಲ—ನಾವೆಲ್ಲಮಿರ್ಪುದಲ್ಲೆ!

ಅಂದಿನಾ ಶಶ್ವತ್ಸ್ವತಂತ್ರದ ನಾಡು ಇಂದು ದಾಸ್ಯದ ಬೀಡು!
ಇಂತಿಹುದ ತಿಳಿದು ತಿಳಿದೂ ಮತ್ತೆ ಕೇಳುವೆಯು—
ಕ್ರಾಂತಿ—ಕ್ರಾಂತಿ ಏಕೆಂದು?

ಪಕ್ಷಿ ಹಿಂದಂದಿಸಲಿ,

ಆಶ್ರಮಕೆ ಬಂದನಾ ಕಾರ್ತವೀರ್ಯ. ಬಂದು,
ತಣಿಯುಂಡು, ಅತಿಥಿಮರ್ಯಾದೆಯನು ಬದಿಗೊತ್ತಿ,
ಆಶ್ರಮದ ಧೇನುವನು, ದಿವ್ಯಸುರಧೇನುವನು,
ತನ್ನ ತನ್ನವರೆಲ್ಲರಂ ತಣಿಸಿದಾ ಧೇನುವನು
ಸೆಳೆದೊಯ್ಯಲೆತ್ನಿಸಿದನರಿವಿಹುದೆ? ನಾವಿರುವು-
ದಾತನಾಳುವ ನಾಡು. ಮಾಹಿಷ್ಮತೀಕ್ಷತ್ರಪ-
ನಾಳ್ವನೆಮ್ಮನು ಎನಲು ಕ್ರಾಂತಿಯೇಕೆಂದೆಂಬೆಯಾ?
ಆಶ್ರಮದ ಕಷ್ಟಸುಖ ಬೇಡ ಬಿಡು—ಪಟ್ಟಣದಿ,
ಕಾರ್ತವೀರ್ಯಾರ್ಜುನನ ಪಟ್ಟಣದಿ—ಒಲ್ಲೆಯಾ!
ದಬ್ಬಾಳಿಕೆಯ ಬಾಳ್ಮೊಸೆಗೆ ಪ್ರಜೆಯೆಲ್ಲಮೊರ್ತುತ್ತು.
ಎರಡುದಿನವಿಲ್ಲಿನ್ನು: ಮಾಹಿಷ್ಮತಿಯಲೊಬ್ಬ;
ಚೆಲುವೆಯಾತನ ನಲ್ಲೆ; ಅರ್ಜುನನ ಮೈದುನನು
ನಿಂತಿದ್ದನಲ್ಲೆ. ಚೆಲುವೆಯನು ನೋಡಿದನು.
ರಾಜ್ಯ ರಾಜನದೆಂದು, ರಾಜ ತನ್ನವನೆಂದು
ಮದಿಸಿ ನಾರಿಯ ಸೆಳೆದು ಉಡೆಯುಲಿಯಲೆತ್ನಿಸಿದ.
ನೀರಯಾರ್ತವ ಕೇಳಿ ನೀರನೈತಂದ.
ಕೈಯಲ್ಲಿ ಮಚ್ಚಿತ್ತು—ಕಿಸಿಸು ಕೆರಳಿತ್ತು.
ತನ್ನವಳ ಮಾನವನು ತಾನು ಕಾಪಿಡಲೆಂದು
ಮಚ್ಚ ಮೇಲೆತ್ತಿದನು;—ಅರ್ಜುನನ ಮೈದುನಗೆ
ರಕ್ತಾಭಿಷೇಕಮಾಯ್ತು—ಯಮನೊಡನೆ ನಿಸೇಕಮಾಯ್ತು.
ಅರಸನಿದನರಿದುರಿದು ಮೈದುನಗೆ ಮರುಗಿದನು.
ತನ್ನವಳ ಮಾನವನು ಕಾಪಿಟ್ಟನಾತನನು
ಹಿಡಿತರಿಸಿ, ಬೆನ್ನಿಂಗೆ ಬಾರೇಳೆ ಕಶೆಯಿಡಿಸಿ,
ಅವನ ಸರ್ವಸ್ವಮಂ ತೆಗೆದು ಬೊಕ್ಕಸಕಿಡಿಸಿ,

ಕಣ್ಣು ಕೀಳಿಸಿ—ಅಯ್ಯೋ !—ನೂಕಿದನು ಹೊರಗೆ !
ಇಂಥದಿನ್ನೆನಿತುಂಟೊ ! ಲೆಕ್ಕಕ್ಕೆ ಸಂಖ್ಯೆಯಿಲ್ಲ.
ಇದನೆಲ್ಲ ನೆನೆಯುವೆನೆ—ಇವರ ಹುಟ್ಟೊರಸಲಿಕೆ
ತವಕಿಸುತ ಬಿಸಿರಕುತ ಧಮನಿಯಲಿ ಧುಮುಕುವುದು.
ನೋಡಿ ನೋಡಿ ನನಗೆ ಸಾಕಾಯ್ತು—ಸಹಿಸಿಯಾಯ್ತು.
ಎಲ್ಲಕ್ಕು ಕೊನೆಯುಂಟು. ಇದಕು ಕೊನೆಯುಂಟು.
ಕ್ರಾಂತಿ ಏಕೆಂದೆ ! ಏಕೆಂಬುದರಿವಾಯ್ತೆ ?
ಇಂದಿನತ್ಯಾಚಾರಗಳಿಗೆ ಕುದಿವುದು ರಕುತ !
ರಕ್ತ ಧುನಿಯಿನ ಧಮನಿ ದುಡಿಯುವುದು ಕೇಳುವುದೆ ?

ಬಿಸಿಬೆವರದು ಬಸಿಯುತಲಿರೆ ಕೆಂಗುಲಿಮೆಯ ಮುಂದೆ
ಉಬ್ಬಿದ ಹಿರಿಖಂಡದ ಭುಜಬಲದವ ಕಮ್ಮಾರ

ಹುಮ್ಮ ಸಿಸಿಂದುಸಿರೆಳೆಯುತ
ಮುಂದಿನ ಅಡಿಗಲ್ಲಿನ ಮೇಲ್
ಸುತ್ತಿಗೆಯಿಂದೆತ್ತಿಳಿಸಿದ

ಒಲ್ಪೆಟ್ಟುಗಳಂತೆ

ಧುಮುಧುಮುಧುಮು ದುಡಿಯುತಲಿದೆ ಬಿಸಿರಕ್ತದ ಧಮನಿ !

ಬಲ್ಲಿತ್ತದು ಬಟ್ಟಿತ್ತದು ಸುಣ್ಣನೆಯದು ಬಂಡೆ
ಬೆಟ್ಟದ ತುದಿಕೋಡಿನ ಕೊನೆಯಿಂದಿರದೆಯೆ ಜಾರಿ

ಮಲೆಮೈಯಲಿ ಚೆಲ್ಲಿರುವ
ಕಲ್ಲುಗಳಲಿ ಕಿಡಿಗಾಣಿಸಿ
ಅರೆಯೊಂದರಿಸಿನ್ನೊಂದಕೆ

ಪುಟಹಾರುವ ರೀತಿ

ಧುಮುಧುಮುಧುಮು ದುಡಿಯುತಲಿದೆ ಬಿಸಿರಕ್ತದ ಧಮನಿ !

[ಒಳಗಣಿಂ "ಭಾರ್ಗವ" ಎಂಬುಲಿಯು ಕೇಳುವುದು.
ಉದ್ದೀಪ್ತ ಭಾರ್ಗವಂಗಾ ಕೂಗು ಕೇಳಿಸದು.]

ಮಲೆಯಗ್ರದಲೊಗೆದಲ್ಲಿಂದರೆಗಳ ನಡುವುರುಳಿ
ಇಳಿನೆಲದಲಿ ಕನಲಿಕೆಯಲಿ ಮೊರೆಯುತ ಹೊರಹೊರಳಿ

ಭೋರ್ಗರೆಯುತ ಕಂದರಗಳ
ಕಲ್ಲೆದೆಯುಸು ಸಿಗಿದೊಗೆಯುತ
ಕಟ್ಟುದ್ಧವ ಧುಮ್ಮಿಕ್ಕುವ
ಜಲಪಾತದ ರೀತಿ

ಧುಮುಧುಮುಧುಮು ದುಡಿಯುತಲಿದೆ ಬಿಸಿರಕ್ತದ ಧಮನಿ !

[ಒಳಗಣಿಂ "ಭಾರ್ಗವ" ಎಂಬುಲಿಯು ಮತ್ತೊಮ್ಮೆ.]

**ವಟು**

ಭಾರ್ಗವ ! ಅದೊ ! ಜಮದಗ್ನಿಗಳ ಕೂಗು !

**ಪರಶುರಾಮ**

ಹೋಗೋಣ. ಮೇಲಿಂದ ವಿಶದವಾಗುಸಿರುವೆನು.

[ಎಂದೆಲ್ಲ ಹೋಗುವರು.]

# ದೃಶ್ಯ ಎರಡು

[ಜಮದಗ್ನಿಯಾಶ್ರಮವು. ಮುನಿದಿರುವ ಜಮದಗ್ನಿ-
ಯೆದುರಿನಲಿ ರೇಣುಕೆಯು ತಲೆವಾಗಿ ನಿಂದಿಹಳು
ತಪ್ಪೆಸಗಿದವಳಂತೆ ಕುಸಿದು ನಿಂದಿಹಳವಳು.
ಭಾರ್ಗವನು ಜಮದಗ್ನಿಯನು ಸಾರ್ದು ನಮಿಸುವನು.]

**ಪರಶುರಾಮ**

ಏನಾರ್ಯ ಕೂಗಿದುದು ?

**ಜಮದಗ್ನಿ**

ಗಂಡುಗೊಡಲಿಯ ಗಂಡ !

ಸರಿಯಿಹುದೊ ಕೊಡಲಿಯಲಗು ?

**ಪರಶುರಾಮ**

ಇಂದಿದೇ ಮಸೆದದ್ದು.

**ಜಮದಗ್ನಿ**

ಸಲ್ಲದು. ಇದೊ ಇವಳ ವಧೆಯಾಗಬೇಕು.

**ಪರಶುರಾಮ**

ಅಕ್ಕ. [ರೇಣುಕೆಗೆ ಬಲವಂದು ಬಾಗುವನು.]

**ರೇಣುಕೆ**

ಕಂದ ! ಚಿರಂಜೀವಿಯಾಗು.

**ಪರಶುರಾಮ**

[ಮೇಲೆದ್ದು] ತಾಯೆ, ಬನ್ನಿ.

[ರೇಣುಕೆಯು ರಾಮನನ್ನನುಸರಿಸಿ ಹೋಗುವಳು.
ಅವಪೋದ ಬಟ್ಟೆಯನೆ ಜಮದಗ್ನಿ ನೋಡುತಿರೆ,

**ಕೊಡಲಿ ಸ್ವಿಷ್ಟೆಂದಿಳಿದು ತಲೆಬಿದ್ದ ಸದ್ದಹುದು.**
**ಕಾರ್ತವೀರ್ಯಾರ್ಜುನನ ದೂತನೊಬ್ಬನು ಆಗ**
**ರಭಸದಿಂದೈತಂದು ಜಮದಗ್ನಿ ಗೆರಗುವನು.**
**ಬೆನ್ನಿನಲಿ ರಾಮನೂ ಸಾರುವನು. ಭಾರ್ಗವಗೆ**
**ರಕ್ತಸೇಚನೆಯಿಂದ ಮೆಯ್ಯೆಲ್ಲ ತುಂಬಿಹುದು.**
**ಕೊಡಲಿಯಿಂದಿನ್ನು ಮರುಣಜಲವೊಸರುತಿದೆ.]**

### ದೂತ

ಕಾಪಾಡಬೇಕು! ಕಾಪಾಡಬೇಕು!

### ಪರಶುರಾಮ

**[ಕೊಡಲಿಯನು ಮೇಲೆತ್ತಿ]** ಕುನ್ನಿ!

### ಜಮದಗ್ನಿ

ರಾಮ! ಕೊಡಲಿಯಿಳುಹು. ಕಾರ್ಯವೇನಾಯ್ತು?

### ಪರಶುರಾಮ

ಆಯ್ತು.

### ಜಮದಗ್ನಿ

ನಲ್ಲದು. ಸ್ಥೈರಣೆಯ ತಾಳಣ್ಣ. ಯಾರಿವನು?

### ಪರಶುರಾಮ

ಪ್ರಜಾಪೀಡಕ ಕಾರ್ತವೀರ್ಯಾರ್ಜುನನ ದೂತ!

### ಜಮದಗ್ನಿ

**[ದೂತನನು ಕುರಿತು]** ಆಶ್ರಮಕೆ ಬಂದಿದ್ದೆಯೇಕೆ? ಹೆದರದಿರು.
ಧೈರ್ಯದಿಂದುಸಿರಣ್ಣ. ಅಭಯವಿತ್ತಿಹೆನಾನು.

### ದೂತ

ಮುನಿವರ್ಯ, ಅರ್ಜುನನ ಗುಪ್ತಚರನಾನು.
ಆಶ್ರಮನಿವಾಸಿಯನು ಚೆಲುವೆ ಪೆಣ್ಣೊರ್ವಳನು
ಪಗಲುಮಿರುಳುಂ ನೋಡಿ ಸುದ್ದಿ ಕಳುಹಿಸಲೆಂದು
ನನಗಾಣ್ಮನಾಜ್ಞೆ.

### ಜಮದಗ್ನಿ

ರೇಣುಕೆಯೊ ಆ ಪೆಣ ?

[ದೂತನಹುದೆಂಬಂತೆ ತಲೆದೂಗೆ ಭಾರ್ಗವನ
ಕೆರಳಿದ್ದು ಮತ್ತೊಮ್ಮೆ ಪರಶು ಮೇಲೇಳುವುದು.]

### ಪರಶುರಾಮ

ನನ್ನಬ್ಬೆ !

### ಜಮದಗ್ನಿ

ರಾಮ ! [ಎಂದವನ ವಾರಿಸುತ ದೂತನನು ಕುರಿತು]

ನಡೆದುದನು ಕಂಡೆಯಾ ?

ಪೋ ! ಪೋಗಿ ಅರ್ಜುನನಿಗರುಹು. ಅವನ ಗೆಯ್ಮೆಯದು.

[ದೂತನಡಿಯೆತ್ತುವನು.]

ಪಿತೃವಾಕ್ಯಪರಿಪಾಲಕ ! ಮೈಗೊಳ್ಳೆಯದು ಸೈರಣೆಯು.
ಬಲ್ದುಡುಕು ಬಲ್ಕೆಡುಕು. ರೇಣುಕೆಯು ಮುಡಿಪಿದುದ-
ದೇಕೆಂದು ತಿಳಿಯಲಾಶಿಪೆಯ ?

### ಪರಶುರಾಮ

ದತ್ತಾವಧಾನನಾನು.

### ಜಮದಗ್ನಿ

ಪೊತ್ತು ಹುಟ್ಟುವ ವೇಳೆಗಿಲ್ಲಿ ಹೂಕೊಯ್ಯಲಿಕೆ
ರೇಣುಕೆಯು ಹೊರಹೊರಟು, ರೇವೆಯ ಸಮೀಪದಲಿ
ಬಿರಿಮುಗುಳನಾಯುತ್ತ, ಜಲದೆಡೆಗೆ ಕಣ್ದಿರುಹಿ
ಕಂಡಳಲ್ಲಿ—ಅಂತಪುರದರಸಿಯೊಡನರ್ಜುನನು
ಸರಸ ಜಲಕೇಳಿಗಳನಾಡುವುದ ಕಂಡಳಲ್ಲಿ.
ಕಾರ್ತವೀರ್ಯನ ಕಂಡು ಜಾರೆಯಾದಳು ಮನದಿ.
ಅವಧಿಯಿಂದಿದನರಿದೆನಾನು. ರೇಣುಕೆಯು
ಆಶ್ರಮಕೆ ಮರಳಿದಳು. ಮುಖದಲ್ಲಿ ಗೆಯ್ಮೆ ಕೆತ್ತಿತ್ತು.
ದೋಷಕ್ಕೆ ದಂಡವುಂಟು. ವಿಧಿಸಿದೆನು ನಾನು.

**ಪರಶುರಾಮ**

ರೇವೆಗರ್ಜುನ ಬಂದನೆ ?

**ಜಮದಗ್ನಿ**

ಅಹುದು ಅರ್ಜುನನು.

**ಪರಶುರಾಮ**

ಕಾರ್ತವೀರ್ಯಾರ್ಜುನನು ?

**ಜಮದಗ್ನಿ**

ಕಾರ್ತವೀರ್ಯಾರ್ಜುನನು.

**ಪರಶುರಾಮ**

ಮಾಹಿಷ್ಮತೀಕ್ಷ್ಮಾಪ ಕಾರ್ತವೀರ್ಯಾರ್ಜುನನು ?

**ಜಮದಗ್ನಿ**

ಮಾಹಿಷ್ಮತೀಕ್ಷ್ಮಾಪ ಕಾರ್ತವೀರ್ಯಾರ್ಜುನನು.

**ಪರಶುರಾಮ**

ಹದಿನೈದು ದಿನ ಹಿಂದೆ ದೇವಧೇನುವನೆಳೆಯು-
ಲೆತ್ನಿಸಿದನವನು ?

**ಜಮದಗ್ನಿ**

ಅಹುದು ಅರ್ಜುನನು.

**ಪರಶುರಾಮ**

ಪ್ರಜಾಪೀಡಕ ಕಾರ್ತವೀರ್ಯ ?

**ಜಮದಗ್ನಿ**

ಕಾರ್ತವೀರ್ಯ.

**ಪರಶುರಾಮ**

ಅಮ್ಮನಿಗೆ ಕಣ್ಣಿಟ್ಟನವನು ?

[ಜಮದಗ್ನಿ ತಲೆದೂಗಿ ಹೌದೆಂಬನು.]

ಆರ್ಯ ! ಅರ್ಜುನನು
ಆಶ್ರಮಕೆ ಬಂದನೇಕೆ ? ಪಾವನದ ರೇವೆಯಿಹು-
ದಂತವುರದುದ್ಯಾನದಲ್ಲೊ ! ಪ್ರಜಾಪೀಡಕನ
ಹಾವಳಿಯು ಹೆಚ್ಚಿಹುದು. ಅಡಗಿಸಲೆ ಬೇಕು.

**ಜಮದಗ್ನಿ**

ನಮ್ಮದಲ್ಲವು ರೇವೆ. ಮಾಹಿಷ್ಮತಿಯ ರೇವೆ.
ಅವನದೀ ಮಾಹಿಷ್ಮತಿ. ಅವನದೀ ಆಶ್ರಮವು.
ಹಾಲಲದ್ದುವನವನು. ನೀರಲದ್ದುವನವನು.
ಕೇಳಿಲ್ಲ ಭಾರ್ಗವ ? " ನಾವಿಷ್ಣುಃ ಪೃಥಿವೀಪತಿಃ " !

**ಪರಶುರಾಮ**

ರಾಜನದು ರಾಜ್ಯವಲ್ಲ. ರಾಜ್ಯ ದೇವನದು.
ಆ ದೇವನೆದುರಿನಲಿ ಭೂಪಗೀಪರು ಒಂದೆ.
ನಮ್ಮಂತೆ ಇವನೊಬ್ಬ—ಕಾರ್ತವೀರ್ಯಾರ್ಜುನನು.
ದೊರೆಯೆಂಬ ಹೆಸರೊಂದು ತಗುಲಿಕೊಂಡಾಕ್ಷಣವೆ
ಸ್ವೈರವೃತ್ತಿಯನೆತ್ತಿ ಕುಣಿಯಲೆಂದಿದೆಯೊ ?
ನಮ್ಮ ಮನೆಯಲಿ ನಮಗೆ ಸ್ವಾತಂತ್ರ್ಯವಿಲ್ಲವೊ ?
ಈ ದಾಸ್ಯದಿಂದೆಮಗೆ ಉದ್ಧಾರವಿಲ್ಲವೇನು ?
ಮನೆಮಠವನಾಪ್ತರನು ಇದರಿಂದ ಉಳಿಸಲಿಕೆ
ಸೈರಣೆಯು ಹಳಸಿಹುದು—ಕೊಡಲಿಯೇ ಉಳಿದಿಹುದು.

[ಎಂದಾಡಿ ಕೊಡಲಿಯೆಡೆ ಕೈಯಿಡುವನು.]

**ಜಮದಗ್ನಿ**

ದುಡುಕದಿರು ಭಾರ್ಗವ. ಅರ್ಜುನನಿಗಣೆಯುಂಟು.
ಮಾಹಿಷ್ಮತಿಗೆ ಕೋಟೆಕೊತ್ತಲುವುಂಟು.
ಸೈನ್ಯಸಜ್ಜಿತಸಾರ್ವಭೌಮನೆದುರಿಂಗೊಬ್ಬ—
ನೀನೊಬ್ಬನೇಗೆಯ್ಯಬಲ್ಲೆ ?

**ಪರಶುರಾಮ**

ನಮಗೇನು ಕೆಚ್ಚಿಲ್ಲದಿಲ್ಲ.
ಮಾಹಿಷ್ಮತಿಯ ಕೋಟೆಕೊತ್ತಲಗಳೇಲೆಕ್ಕ !
ರಸೆವುಗಲಿ, ಅಜನ ಗುಂಡಿಗೆವುಗಲಿ, ಮುರಹರನ
ಬಸಿರ ಹೊಂದಾವರೆಯ ಹೊಕ್ಕರೂ ಈ ರೌದ್ರ
ಗಂಡುಗೊಡಲಿಯ ಮೊನೆಯವಗೆ ತೋರಿಸದೆ ಬಿಡುವೆನೇ !
ಕೈಯಲಿರೆ ಕೊಡಲಿ ಸಮರರಂಗದಲಾಸು
ಪ್ರಳಯಕಾಳಾನಳಂ ! ಬೇರೆಣಿಸಬೇಡಾರ್ಯ !
ಹೊಸರಕುತ ಹೊನಲ್ವರಿಯೆ ಉರ್ಕಿನಿಂದೊಲೆವನಲ್ಲ—
ಕಲ್ಲು ಕಣ್ಣೀರಿಡುವ ನಾಡ ಸಂಕಟ ಕಂಡು
ನನ್ನೆದೆಯಲೆದ್ದಿರುವ ಬೇಗೆಯನು ಬಲ್ಲಿರಾ ?
ನವಿರಿನಿಂ ಕೂರಸಿಯು ತೂಗುತಿಗೆ ಮೇಲೆ !
ಯಾವ ಗಳಿಗೆಯಲೆಲ್ಲಿ ಬೀಳುವುದೊ—ಹೇಳುವವರಾರು ?
ಮಾಹಿಷ್ಮತೀಕ್ಷ್ಮಾತ್ರ ಪರರ್ಬುದರ್ಬುದವಿರಲಿ—
ಸೆಳೆಗೊಂಬೆಯಲ್ಲಿರುವ ಕುಡಿಗಳನು ಸಮರ್ವಂತೆ
ಏಟಿಗೆಣ್ಟಾಸಿರಂ ಪಿಳ್ಳೆಗಳಸುರುಳಿಸುವೆ.
ನುಚ್ಚು ನೂರಾರಾಗಿ ಗಿಜಿಗಿಜಿಯು ಮಾಹಿಷ್ಮತಿ !
ನಡನಡುಗಿ ಪೊಡವಿಯೊಳಗಡಗುವುದು ಮಾಹಿಷ್ಮತಿ !
ಬಿಲ್ಗೊಡಲಿ ಹಿಡಿದೆವೇಕೆ ? ಹೆಸರ ಬಿಲ್ಗಾರಿಕೆಗೆ ?
ಗಂಡುಗೊಡಲಿಯು ನಮ್ಮ ಭುಜಕೆ ಭೂಷಣವೆಂದೊ ?
ಮೃಗಗಳಂ ನೋಡಾರ್ಯ ! ಬಲೆಗೆ ಬಲಿಯಾಗಿ,
ಪಾರು ಬೇರಿಲ್ಲದಿರೆ, ರೋಸಿ, ಹಿಂದಿರುಗಿ,
ಕುರುಡು ಧೈರ್ಯವ ನೆಮ್ಮಿ, ಬೇಂಟೆಯನನೆದುರಿಸವೆ ?
ನೇಗಿಲೆಳೆಯುವ ಹೋರಿ—ಸಾಧುಗಳ ಸಾಧುವದು—
ಕೆರಳು ಹೆಚ್ಚಲು ತನ್ನ ಯಜಮಾನನನು ಕೂಡ,
ಕೊಂಬುಗಳ ಮಸೆಯುತ್ತ ಗಗನಕ್ಕೆ ಚಿಮ್ಮಿಸದೆ ?
ಕಾದಬಲ್ಲವರಾವು—ಮೋದಬಲ್ಲವರಾವು.
ಧರ್ಮ ನಮ್ಮಲ್ಲಿರಲು ದೈವಬಲವುಂಟೆಮಗೆ.
ದೈವಬಲವೊದಗಿರಲು ಗೆಲವು ಸಿದ್ಧವು ನಮಗೆ.

### ಜಮದಗ್ನಿ

ಕದನ ಘೋರವು ರಾಮ. ಸುತ್ತೆತ್ತ ಸರಳಸುರಿ ;
ನರಲ್ವ ಭಟರುರುಳ್ವ ದಳಂ ; ಪೊರಳ್ವ ಸಿಂಧುರ ಪಂಕ್ತಿ ;
ಕೆನ್ನೀರ ಮುನ್ನೀರು ; ಶೂನ್ಯದಾ ಪಗೆವಾಡಿ ;
ಭೀಷ್ಮವಿದು ಸಂಗ್ರಾಮಂ. ಸಮರಮಾರಿಯ ಸಂಗ-
ವೊಮ್ಮೆ ಮಾಡಿದರಾಯ್ತು—ಎಂದೆಂದುಮವಳು ಬಿಡಳು.
ಶಕ್ತಿಯಿದ್ದರು ಕೂಡ ಯುಕ್ತಿಯೊಂದನೆ ಹೂಡಿ
ಹನಿರಕ್ತ ಚೆಲ್ಲದೆಯೆ ಗೆಲ್ವವನೆ ಮಾನ್ಯನಹನು.

### ಪರಶುರಾಮ

ದೇವಸಿತ್ತುದನೆಲ್ಲವನುಭವಿಸಲೇ ಬೇಕು.
ಆದರೀ ಮನುಜರನ್ಯಾಯಗಳ ಸಹಿಸಲಳವಲ್ಲ—
ರಕ್ತ ಹರಿದರು ಸಮನೆ—ಹರಿಯದಿದ್ದರು ಸಮನೆ.

### ಜಮದಗ್ನಿ

ಅಪ್ಪುದಪ್ಪುದು ಕಂದ. ನಾನು—ಮುದಿ—ನನಗೆಯೇ
ಈ ಪ್ರಜಾಪೀಡನೆಯ ಕಂಡು ಮನ ರೋಸಿಹುದು.
ನಿಮ್ಮ ಕೇಳಲು ಬೇಕೆ ! ಪಾಪಿ ಕೇಳಿದ ಮಾರು
ಪಾಶವನು ಕೊಡಲವನು ತಾನಾಗೆ ಸಾಯುವನು.
ಸೈರಿಪುದು.

### ಪರಶುರಾಮ

ಸೈರಿಪುದು ! ಸೈರಿಸುವುದೆನಿತು ಕಾಲ ?
ಕೇಳಾರ್ಯ ! ಅರ್ಜುನನ ಮನ್ನಿಸುವೆನಿನ್ನೊಂದು ಸೂಳು.
ಆ ಬಳಿಕ ನಿಮ್ಮ ನುಡಿ ಟಾಠಡಾಢಣವೆನಗೆ.
ಮನರೋಸಿ, ಮನಹೇಸಿ, ಸೈರಣೆಯು ಸವೆದಿಹುದು.
ಸ್ವಾತಂತ್ರ್ಯವೆಮ್ಮುಸಿರು—ಉಸಿರಾಡಲೆಡೆಯಿಲ್ಲ.
ಕುನ್ನಿಗಳ ಬುಡಕೆ ಬೆನ್ನೀರೆರೆಯದಿರೆ ನಾನು
ಕೆಮ್ಮನೀ ಕೊಡಲಿವೊತ್ತವನೇನು ! ಭೃಗುವಿಂಗೆ ಬಂದೆನೇನು !

**ಜಮದಗ್ನಿ**

ಅದಿರಲಿ ಭಾರ್ಗವ. ನುಡಿಯ ನಡೆಸಿದೆ ನೀನು.
ನಿನಗೆ ಮೆಚ್ಚಿದೆನಾನು. ವರವಾವುದೆರೆವೈ ?

**ಪರಶುರಾಮ**

ಆರ್ಯ, ದೋಷನಿರ್ಮುಕ್ತಳೇ ಮಾತೆ ?

**ಜಮದಗ್ನಿ**

ಪಾವನಳು.

ಕೊಡಲಿ ಕಡಿತದ ಜೊತೆಗೆ ಹೋಯ್ತುವಳ ದೋಷ.

**ಪರಶುರಾಮ**

ಹಾಗಿದ್ದರವಳ ಬದುಕಿಸಬೇಕು—ಕೃಪೆದೋರಿ.

**ಜಮದಗ್ನಿ**

ನಲ್ಲ ವರವನೆ ಕೇಳ್ದೆ. ಅಂತೆಯಕ್ಕೆ. ಕ್ರಾಂತಿನಾಥ !
ಭೀಷ್ಮಂ ನಿನ್ನ ಸೂರುಳ್. ಆದೊಡಂ ನನ್ನಾಜ್ಞೆ-
ಯಿಲ್ಲದೆಯೆ ನೀನವನಿಗೆರಗಲಾಗದು ಕಂಡಾ !

**ಪರಶುರಾಮ**

ಆಜ್ಞೆ ಹೊತ್ತಿರುವೆನೆಂದುಂ.

**ಜಮದಗ್ನಿ**

ನಲ್ಲದು.

ನಿನ್ನಿಚ್ಛೆಯಂತವಳನೆಬ್ಬರಿಸುವಂ. ಬಾ !

[ಇಬ್ಬರೂ ತೆರಳುವರು.]

# ದೃಶ್ಯ ಮೂರು

[ಜಮದಗ್ನಿಯಾಶ್ರಮದ ಕಾಡು. ಭಾರ್ಗವನು
ಭೀಷಣಭ್ರುಕುಟಿಯುಂ ಭುಜಲಗ್ನಪರಶುವುಂ
ತಾನಾಗಿ ದೆಸೆಗಳ್ಗೆ ಮುನಿದು ಬರುತಿಹನು.]

**ಪರಶುರಾಮ**

ನಡುವಗಲಲೇನು ಬಿರುಗಾಳಿ! ಅಹುದಹುದು.
ಕಲ್ಪನಿಲ್ಲುವವರೆಗು ಮಂದಮಾರುತಸುಳಿವು ;
ಬಿರುಗಾಳಿ ಬೀಸುವುದು ತುಸುಕಾಲ ಮಾತ್ರ!
ಹಗಲೆಲ್ಲ ಸುರಿಯುವುದು ರವಿಕರಾವರ್ಷ ;
ಮಧ್ಯಾಹ್ನದುರಿಬಿಸಿಲು ಚಣಕಾಲ ಮಾತ್ರ!
ಜನಪದದ ಹಿತಕಾಗಿ ಬೆವರು ತೆಗೆವರಸು
ನೆಲಸನಾಳ್ವನು ತನ್ನ ಜೀವವಿರುವನಕ ;
ದಬ್ಬಾಳಿಕೆಯು ಕಳ್ಳು ಕುಡಿದು ಮದವೆತ್ತು,
ಪಿತ್ತ ನೆತ್ತಿಗೆ ಹತ್ತಿ ಉನ್ಮತ್ತಳಾಗಿ
ಕಣ್ಮುಚ್ಚಿ ಕುಣಿಯುವಾ ಹುಚ್ಚು ದಬ್ಬಾಳಿಕೆಯ
ಕೈಗಳಲಿ ಕೈಯಿಟ್ಟು,
ಪ್ರಜೆಗಳಳಿವುಳಿವೆನದೆ ಕ್ರೌರ್ಯವನೆ ತೊಟ್ಟು,
ಅವಳಂತೆ ತಾನು ಸಹ ಕುಣಿವ ನಾಡೊಡೆಯನೊಂ-
ದೆವೆಯಿಕ್ಕುವನಿತರಲಿ ಜಾರುವನು ಪುಡಿಗೆ!

ಎಣಿಕೆಗಸದಳದಾಳ್ಗಳಿರಲಿಳಾಭಾಗದಲಿ
ಎಲ್ಲರನು ಬಿಟ್ಟೊಬ್ಬನೊಬ್ಬನನೆ ದೊರೆಯೆಂದು
ಆಯ್ದೆತ್ತಿ, ಮೆಚ್ಚಿತ್ತು ನಿಲ್ಲಿಸಿದುದೇಕೆ?
ಶಿಷ್ಟರನು ದುಷ್ಟರಿಂದಾರಯ್ಯಲೆಂದು!
ನ್ಯಾಯವನ್ಯಾಯಗಳ ತುಲನೆ ಮಾಡಲಿಕೆಂದು!

ಸರುವ ಸವುತೆಯು ತೋರಿ ಪ್ರಜೆಯು ಪಾಲಿಸಲೆಂದು !
ಮಿತಿಯೆಂಬುದನು ಮರೆದು ಮನಕೆ ಬಂದಂತೆಲ್ಲ ಕುಣಿಯಲೆಂದಲ್ಲ ;
ದಬ್ಬಾಳಿಕೆಯು ಕತ್ತಿ ಹಿರಿದು ತಿರುಗಿಸುತ ಜನರ ಹಿಂಸಿಸಲಲ್ಲ ;
ಗೋಳಹುಯ್ಯುವುದಕಲ್ಲ ನಾಡಿಗರ ಬಡಿದು ;
ಅವರ ಸಂಕಟ ಕಂಡು ನೆಲದಡಿಯ ಮರುಳಂತೆ ಹಿಗ್ಗಲೆಂದಲ್ಲ ;

ದೇವನೆಂಬುವನುಂಟು—ನ್ಯಾಯ ನೀಡಲಿಕೆ ! ಶಿಕ್ಷೆ ಸಲಿಸಲಿಕೆ !

ದೇವನೆಂಬುವನಿರನೆ—ಇದ್ದು ಬರದಿಹನೆ—

ನಾನೆ ಇಲ್ಲುಂಟು—ನೇಡು ತೋಡಲಿಕೆ ! ನ್ಯಾಯ ತೆಗೆಯಲಿಕೆ !

[ಒಳಗಣಿಂ "ಭಾರ್ಗವ ! ಕೆಟ್ಟೆ ! ಕೆಟ್ಟೆ !"
ಎಂಬ ಕೂಗಾಗುವುದು. ಭಾರ್ಗವನು ಬೆಚ್ಚುವನು.]

ಏನಿದೇನಿದು ಕೂಗು ! ಯಾರದೀ ಆರ್ತ ?

[ಮತ್ತಮದೆ ಕೂಗು ]

ತಾಯಿ ರೇಣುಕೆಯ ದನಿ ! ಏನಾಯ್ತೊ ಕಾಣೆನೇ !

[ಕೊಡಲಿಯನು ಬಿಗಿಹಿಡಿದು ದನಿಯನನುಸರಿಸುವನು.]

---

# ದೃಶ್ಯ ನಾಲ್ಕು

[ಜಮದಗ್ನಿಯಾಶ್ರಮವು. ಜಮದಗ್ನಿ ಕರವಾಳ-
ವೊಂದವನ ಮೆಯ್ಯಲ್ಲಿ ನಾಟಿರಲು ಮಲಗಿಹನು.
ರೇಣುಕೆಯು ಗೋಳಾಡಿ ಶವದ ಮೇಲುರುಳಾಡಿ
ಭಾರ್ಗವನ ಕರೆಯುತಿರಲೈತರುವನಾ ರಾಮ ]

**ರೇಣುಕೆ**

ಭಾರ್ಗವ! ಕೆಟ್ಟೆ! ಕೆಟ್ಟೆ!

**ಪರಶುರಾಮ**

ತಾಯೆ!

ಏನಾಯ್ತು? ಅಯ್ಯಂಗೆ ಸಾವೇ! ಆರದೀ
ಸುರಿಗೆ? ಕೊಲೆಯ ಕೈಯಾರದಿದು?

**ರೇಣುಕೆ**

ಕಾರ್ತವೀ........

**ಪರಶುರಾಮ**

ಕಾರ್ತವೀರ್ಯ! ಎಲ್ಲೆಲ್ಲಿಯೂ ಕಾರ್ತವೀರ್ಯ! ಎಲ್ಲಿಹನೊ
ಪಾಪಿ?]

**ರೇಣುಕೆ**

ಕೇಳ್ ಕಂದ. ದೂತನೊಬ್ಬನು ನನ್ನ ವಧೆಯ ವೃ-
ತ್ತಾಂತವನು ಅವನಿಗರುಹಿದನಂತೆ. ಅದ ಕೇಳಿ
ಬಂದಿಲ್ಲಿ, ಸಮಾಧಿಯಲ್ಲಿದ್ದವನ ಮೂದಲಿಸಿ,
ಮಾರುತ್ತರಂಗುಡದೆ ಜಮದಗ್ನಿ ಕುಳಿತಿರಲು,
ಕಿತ್ತ ಸುರಿಗೆಯಿನಿರಿದು, ನನ್ನ ಕೂಗನು ಕೇಳಿ
ಓಡಿಹೋದ. ಅರಸನಿಗೆ ನನ್ನ ಕಂ........

[ಎಂದಲ್ಲಿ ನಿಲಿಸಿ ತಲೆಬಾಗಿ ಕುಸಿಯುವಳು.]

**ಪರಶುರಾಮ**

ಗೊತ್ತಾಯ್ತು ತಾಯೆ.
ಮದಗಜದ ಮೂಳೆ ಮುರಿಯಲಿಕಿದುವೆ ಕೊನೆಯ ಕಡ್ಡಿ.
ಮುಗಿಯಿತ್ತು ಅವನ ಕತೆ. ಸೈರಣೆ ಸಮಾಧಿಯಾಯ್ತು.
ಅಯ್ಯನಪ್ಪಣೆ ಪಡೆಯೆ ಸಾಧ್ಯವಿಲ್ಲ—
ಅಯ್ಯನಾಜ್ಞೆಯನೊತ್ತಿ ನೂಕುವೆನತ್ತ.
ಕ್ರಾಂತಿಕಾಳಾನಳಂಗಿದುವೆ ನರಿಹೊತ್ತೆದ್ದು
ಬ್ರಹ್ಮಾಂಡಕಲ್ಮಷವ ಸುಟ್ಟುರಿಪಲು.
ಪ್ರಳಯದಂದಿನ ಸಮಕೆ ನಿಲ್ವುದೀ ದಿನವಿಂದು.
ಮೈಯಲ್ಲಿ ಕಸುವುಂಟು. ಎದೆಯಲ್ಲಿ ಕೆಚ್ಚುಂಟು.
ನನ್ನ ಬಲದೋಳಿನಲಿ ಪೂರ ನಂಬುಗೆಯುಂಟು.
ಧರ್ಮ ನಮ್ಮಡಿಗುಂಟು. ಬಲಹೆಗಲ ಮೇಲುಂಟು
ಕೈದುಗಳ ಮಣಿಮಕುಟ ಕೂರಲಗ ಗಂಡುಗೊಡಲಿ.
ಇಷ್ಟೆಲ್ಲವೊಂದೆಕಡೆ ಕೂಡಿಕೊಂಡಿರಲಮ್ಮ-
ವಿಲಯ ಕಾಲದ ಭವನ ಸಮನಿಲ್ಲಬಲ್ಲೆ ನಾನು!
ಕಾಲನನು ಹಿಂಗಟ್ಟುಮುರಿಗಟ್ಟಿ ನೆಳೆತಂದು
ಅವನ ಕಣ್ಣೆಯಲವಗೆ ಉರಲಹಾಕುವೆನಾನು!
ದುಷ್ಟಶಾಸನಕಾಗಿ ಕೊಡಲಿಯೆತ್ತುವೆನಿಂದು.
ಮೊತ್ತಮೊದಲೀ ದುರುಳ ಕೃತವೀರ ಕುನ್ನಿಯನು
ಸದೆದು, ಬಳಿಕಯ್ಯಂಗೆ ಸಂಸ್ಕಾರವಂ ನಡೆಸಿ,
ಗಂಡುಗೊಡಲಿಯು ಗಂಡನೆಂದಿಳೆಯು ತತ್ತರಿಸೆ
ಭೂಚಕ್ರಮಂ ತಿರುಗಿ ಮುಯ್ಯೇಳು ಸೂಳ್
ಬುಡಸಹಿತ ಕ್ಷಾತ್ರವಂ ಕಿತ್ತುರಿಪಿ ಹಾಕುವೆನು.
ಕ್ಷಾತ್ರಕ್ಕೆ ಪಿಳ್ಳೆಪೆಸರಿಲ್ಲದಂತೆಸಗುವೆನು.
ಹೋಗಿಬರುವೆನು ತಾಯೆ. ಹರಸಿ ಕಳುಹಮ್ಮ.
ಕ್ರಾಂತಿಗರ್ಪಿತವಿದೀ ಕೂರ್ಮಸೆದ ಕೊಡಲಿ.
ನನ್ನುಸಿರಿಗುಸಿರಿದುವೆ. ಇದನು ಹರಸಮ್ಮ.

[ರೇಣುಕೆಯ ಪಾದದಡಿ ಕೊಡಲಿಯನ್ನಿಳಿಸಿ
ಅದರ ಪಕ್ಕದೆ ತಾನುಮವಳಿಗೆರಗುವನು.]

## ರೇಣುಕೆ

ಧನ್ಯಾತ್ಮ ಭಾರ್ಗವ! ನಿನ್ನದೇ ನಾಡಭಕ್ತಿ.
ಹೆಚ್ಚೇನು! ನಾಡ ಬಿಡುಗಡೆ ತಾನೆ ನಮಗೆಲ್ಲ ಸಗ್ಗ.
ತುಡುಕು ಕೈದುಗೆ ಕೈಯ! ಕಳಕೆ ಸಾಗಿಸು ಮೆಯ್ಯ!
ಅರಿಶಿರವ ಚೆಂಡಾಡು! ಮಿರ್ತ್ಯೊಡನೆ ಮುಂಡಾಡು!
ಬೆಟ್ಟದಂತಟ್ಟೆಗಳ ರಾಶಿ ಬೆಳೆಯುತ್ತಿರಲಿ,
ಕೆನ್ನೀರ ಮುನ್ನೀರು ಮೊರೆದು ಹರಿಯುತ್ತಿರಲಿ.
ನಾಡಿನಡಿಗೆರಗುತ್ತ ಬಿಡುಗಡೆಯ ನೆನೆಯುತ್ತ,
ಮುಂದಕಡಿಯಿಡು ವೀರ—ಹಿಡಿದುದಾಗಿಸು ವೀರ!
ತನುವಿನಲಿ ಹನಿರಕುತವಿರುವತನಕ
ಚೇತನವು ದೇಹದಿಂ ಹೊರಡುವನಕ
ನೆನೆ ನಾವು ತಾಯ್ನಾಡ ತನಯರಾವೆಂದು,
ತಾಯ ಬಿಡುಗಡೆಗಾಗಿ ಕಾದುವರು ಎಂದು ;
ಧರ್ಮಕ್ಕೆ ಸೆಣಸುವೆವು ದೈವಬಲವುಂಟೆಮಗೆ,
ದೈವಬಲವೊದಗಿರಲು ಗೆಲವು ಸಿದ್ಧವು ನಮಗೆ,
ಎಂದು ದೃಢನಿಶ್ಚಯದಿ ಅಚಲದೊಮ್ಮನದಲ್ಲಿ
ಕಳಕೆ ಕಾಲಿಡು ನೀನು, ಹಿಡಿದುದಾಗಿಸು ನೀನು ;
ಬಿಡುಗಡೆಯ ಪಡೆವಳ್ಳೈ ನಾಡದೇವಿ,
ಜಯವ ನಿನಗೀವನ್ನೈ ದೇವಸೋವಿ.

ಜಾಮದಗ್ನ್ಯಂ ಗೆಲ್ಗೆ !
ಜಯಮಕ್ಕೆ ಕ್ರಾಂತಿಗೆಂದುಂ !
ವಿಪ್ಲವಕೆ ವಿಜಯಮಕ್ಕೆ !

[ಎಂದು ಹರಸುವಳು.]

## ದೃಶ್ಯ ಐದು

[ಆಶ್ರಮದ ಕಾಡಿನಲಿ—ಭಾರ್ಗವನು ಭೈರವನು.
ಹೆಗಲಲಿದೆ ಕ್ರಾಂತಿಗೆಂದೆತ್ತಿಟ್ಟ ಕೊಡಲಿ.]

**ಪರಶುರಾಮ**

ಪ್ರಜಾಪೀಡಕ! ನಿನ್ನ ಘೋರಮುಷ್ಟಿಯ ಬಿಡಿಸಿ
ಜನಪದವ, ನಮ್ಮಾಶ್ರಮವನುಳುಹಬೇಕಾನು.
ಒಬ್ಬರೊಂದರ ಗೊಡವೆಯಿಲ್ಲದೆಯೆ ನಾನಿದ್ದೆ.
ಕೊಡಲಿಯೆತ್ತುತಲಿದ್ದೆ ಒಣಮರಗಳಿಗೆ ಮಾತ್ರ.
ಕೊಲೆಯ ನೆರಳಿನ ಛಾಯೆ ಸೇರುತಿರಲಿಲ್ಲವೆನಗೆ.
ನೀನೆನ್ನ ಶಾಂತಿಯನು ಸದೆದು ಚೆಲ್ಲಾಡಿ
ಮಾನುಷ್ಯದಮೃತವನೆ ಕಾಳಕೂಟವ ಮಾಡಿ
ರಕ್ತಪಾತಕೆ ನನ್ನ ಹಿಡಿದೆಳೆದು ತಂದಿರುವೆ.
ನಿನ್ನ ಬಾಳಿನ ಬೆಳಕ ನಂದಿಸಲಿಕಡ್ಡವಿ- ಮೇಲೆ.]
ದ್ದಯ್ಯನನು ಕೊಂದು, ಚಪ್ಪಡಿಯನೆಳೆದುಕೊಂಡಿರುವೆ ತಲೆಯ
ಯಾವುದಕೆ ಹೇಸುತಿದ್ದೆ—ಅದೆ ನನಗೆ ಪ್ರಿಯವಿಂದು.
ತನ್ನ ಕರುಳಿನ ಕಡೆಗೆ ಕೊಡಲಿಯಿಡಬಲ್ಲವನು
ಮಾರಾಂತು ರಿಪುಶಿರವನಿಳುಹಲೂ ಬಲ್ಲ.
ಮೊದಲ ರಕ್ತದ ಸವಿಯನೀ ಕೊಡಲಿ ಕಂಡುದಿಂದು—
ತಾಯ ಪಾವನದ ಕೆನ್ನೀರೊಳಾಳ್ದು.
ಕಾರಣವ ಕೇಳಿದೆನು—ಕಾರಣನು ನೀನೆಂದು ಕೇಳಿದೆನು
ತಾಯ ನೆತ್ತರಲೆನ್ನ ಕೊಡಲಿ ಮಿಂದುದಕ್ಕೆ.
ಆಗ, ನನ್ನ ನುಭವದ ನರಕಯಾತನೆಗಳಲಿ,
ನರಕದುರಿಬಾಯಿನಾ ಸಂಕಟದ ನಡುವಿನಲಿ,
ಮನದೊಳಗೆ ಮಾಡಿದೆನು—ಮುಂದೆ ಕೊಡಲಿಯ ನೆಗಪೆ
ನಿನ್ನ ಮಂಡೆಯ ಸಿಡಿಸಲಿಕೆ ಎಂದು ಮಾಡಿದೆನು—

ಘೋರಪ್ರತಿಜ್ಞೆಯೊಂದಂ. ಪವಿತ್ರತರ ಪೂಣ್ಕೆಯದು.
ಋಣವಿನ್ನು ಸಂದಿಲ್ಲ—ಕಾಲವೊದಗಿಹುದೀಗ.
ನೀನರಸನಿರಬಹುದು ; ಪರಮಾತ್ಮ ಕಳುಹಿಸಿದ
ಪ್ರತಿನಿಧಿಯೆ ಇರಬಹುದು. ಆದರೂ ನಿನ್ನಂತೆ
ಪರಮಾತ್ಮ ನಾಡುವನೊ ? ಜನರ ಗಂಟಲ ಮೆಟ್ಟಿ
ಹಿರಿಹಿಗ್ಗಿ ಬಿರಿಯುವೀ ನಿನ್ನಾಟ ಮೆಚ್ಚುವನೊ ?
ಆಡಾಡು. ಪಾಪಕ್ಕು ಮೇರೆಯುಂಟು.
ಮಾಡಿದುದರೊತ್ತಿನಲಿ ಸೇಡು ಬಂದೇ ಬಹುದು.

ದೇವನೆದುರಲಿ ನಿಂತು ವರದಿಯೊಪ್ಪಿಸಲಿಕ್ಕೆ
ಕಾರ್ತವೀರ್ಯಾರ್ಜುನ—ಪಯಣಕನುವಾಗು.
ನಿನ್ನ ಬಾಳಿನ ನೂಲು ಸವೆದು ಸಣ್ಣಾಗಿಹುದು.
ಬುವಿಯಿಂದ ನಿನಗಿಂದೆ ಮುಕ್ತಿ.

ಬಾ ನನ್ನ ಕೊಡಲಿ. ನೀನೆನ್ನ ಬಲಭುಜವು.
ಇಂದುವರಮಾಶ್ರಮದಿ ದರ್ಭೆ ಸವರಿಸುತಿದ್ದೆ.
ಗೆಡ್ಡೆಗೆಣಸನು ಕಡಿದು ಹಣ್ಣು ಹೆಚ್ಚುತಲಿದ್ದೆ.
ಹೋಮದಿಂಧನವೆಲ್ಲ ರಾಶಿಗೂಡಿಸುತಿದ್ದೆ.
ಈಗಿರುವ ಕಾರ್ಯವೇ ಬೇರೆ. ಕಡಿದಿಟ್ಟ
ಮರಗಿಡದಿ ಜೀವರಸವೊಸರುವುದ ಕಂಡಿರುವೆ.
ನಾಡ ಪೀಡೆಯ ಕರಿಯ ಜೀವರಸವೊಸರುವುದ-
ನಿಂದು ಕಾಣುವ ಹೋಗಿ. ಜನರ ನೆತ್ತರ ಪೀರ್ದ
ಸಾಲಗಾರನ ಹಿಡಿದು ತೆಗೆದ ಸಾಲವನವನು
ತೆರುವಂತೆ ಗೆಯ್ವಂ.

ಬಾ ! ಗಂಡುಗೊಡಲಿ !

ಎಳೆಯಂದಿನಿಂದುವರವೊಡನಾಡಿಗಳು ನಾವು.
ಮದ್ಭುಜಕೆ ಮುಯ್ವಿತ್ತು ಬೆಳೆದವನು ನೀನು.
ಇದುವರೆಗು ಕಡಿದ ಕೆಲಸಗಳೇನು ಕೆಲಸವಲ್ಲ.

ಇಂದಿಹುದು ಕೆಲಸ—ಕ್ರಾಂತಿಗಾಲದ ಕೆಲಸ.
ನಮ್ಮ ಪಾಲ್ಗಿಂದುವರಮಿತ್ತು ಶಾಂತಿ.
ಇಂದಿಂದಮೆಮಗೆ ಕ್ರಾಂತಿ—ಪವಿತ್ರ ಕ್ರಾಂತಿ!

[ತೆರೆಯಿಳುವುದು.]

---

# ದೃಶ್ಯ ಮೂರು

[ಜಮದಗ್ನಿಯಾಶ್ರಮದ ಕಾಡು. ಭಾರ್ಗವನು
ಭೀಷಣಭ್ರುಕುಟಿಯುಂ ಭುಜಲಗ್ನಪರಶುವುಂ
ತಾನಾಗಿ ದೆಸೆಗಳ್ಗೆ ಮುನಿದು ಬರುತಿಹನು.]

**ಪರಶುರಾಮ**

ನಡುವಗಲಲೇನು ಬಿರುಗಾಳಿ! ಅಹುದಹುದು.
ಕಲ್ಪನಿಲ್ಲುವವರೆಗು ಮಂದಮಾರುತಸುಳಿವು ;
ಬಿರುಗಾಳಿ ಬೀಸುವುದು ತುಸುಕಾಲ ಮಾತ್ರ!
ಹಗಲೆಲ್ಲ ಸುರಿಯುವುದು ರವಿಕರಾವರ್ಷ ;
ಮಧ್ಯಾಹ್ನದುರಿಬಿಸಿಲು ಚಣಕಾಲ ಮಾತ್ರ!
ಜನಪದದ ಹಿತಕಾಗಿ ಜೀವರು ತೆಗೆವರಸು
ನೆಲನನಾಳ್ವನು ತನ್ನ ಜೀವವಿರುವನಕ ;
ದಬ್ಬಾಳಿಕೆಯ ಕಳ್ಳು ಕುಡಿದು ಮದವೆತ್ತು,
ಪಿತ್ತ ನೆತ್ತಿಗೆ ಹತ್ತಿ ಉನ್ಮತ್ತಳಾಗಿ
ಕಣ್ಮುಚ್ಚಿ ಕುಣಿಯುವಾ ಹುಚ್ಚು ದಬ್ಬಾಳಿಕೆಯ
ಕೈಗಳಲಿ ಕೈಯಿಟ್ಟು,
ಪ್ರಜೆಗಳಳಿವುಳಿವೆನದೆ ಕ್ರೌರ್ಯವನೆ ತೊಟ್ಟು,
ಅವಳಂತೆ ತಾನು ಸಹ ಕುಣಿವ ನಾಡೊಡೆಯನೊಂ-
ದೆವೆಯಿಕ್ಕುವನಿತರಲಿ ಜಾರುವನು ಪುಡಿಗೆ!

ಎಣಿಕೆಗಸದಳದಾಳ್ಗಳಿರಲಿಳಾಭಾಗದಲಿ
ಎಲ್ಲರನು ಬಿಟ್ಟೊಬ್ಬನೊಬ್ಬನನೆ ದೊರೆಯೆಂದು
ಆಯ್ದೆತ್ತಿ, ಮೆಚ್ಚಿತ್ತು ನಿಲ್ಲಿಸಿದುದೇಕೆ?
ಶಿಷ್ಟರನು ದುಷ್ಟರಿಂದಾರಯ್ಯಲೆಂದು!
ನ್ಯಾಯವನ್ಯಾಯಗಳ ತುಲನೆ ಮಾಡಲಿಕೆಂದು!

ಇತ್ತಕಡೆ ಪೂರ್ಣತೆಯು ಪಡೆದತ್ತು ಪೂಣ್ಕೆ.
ನೀ ಬಗೆದ ಸೇಡಿಂಗೆ ದೊರೆಯಿತ್ತು ಕಾಣ್ಕೆ.
ಕ್ಷಾತ್ರಕುಲಜಲಧಿಯಿಂ ಮೊಗೆಮೊಗೆದ ಕೆನ್ನೀರ
ಮಡುಗಳ್ ಸ್ಯಮಂತಪಂಚಕಮಿಹುದು ಮುಂದೆ.
ಇನಿತಾದೊಡಂ ನಿನ್ನ ಸೇಡಿಂಗೆ ತಣಿವಿಲ್ಲದಿಹುದೊ!
ಕ್ಷಾತ್ರಮಂ ಸವರಿದುದು ಹೆಚ್ಚಲ್ಲ ಭಾರ್ಗವ.
ಲೋಕಮಂ ಕಾಪಿಡುವುದದಕಿಂತ ಮುಖ್ಯತಮು.
ಆಳಲಿಕೆ ಪಾತ್ರಗಳನಾಯುವುದು ಮುಖ್ಯತಮು.
ಇನಿತೆಲ್ಲಮಂ ಮರೆತು, ಸತ್ತ ಸೇಡನೆ ನೆನೆದು,
ಅರುಣಜಲದೋಕುಳಿಯನಾಡುತಿರಲೆಂತು?
ಜ್ಞಾನಿ ಭಾರ್ಗವ ನೀನು. ಬಲ್ಲವನು ನೀನು.

[ಎವೆಮಿಡುಕದಿನಿತುವರಮೀಕ್ಷಿಸುತಲಿದ್ದು,
ಕೈಕಾಲು ಮೈ ಬಟ್ಟೆಯೆಲ್ಲವುಂ ರಕ್ತಮಯ-
ನೆದ್ದು ಬಂದವನೆದುರು ನಿಂದು ನುಡಿಯುವನು.
ತಾಮ್ರತೆಯನಾಂತ ಬಲಗೈಯ ಕೊಡಲಿ
ಕೆನ್ನೀರ ಕಕ್ಕುತಿದೆ ಕೊನೆಮೊದಲ ಮರೆತು.]

### ಪರಶುರಾಮ

ಸತ್ತ ಸೇಡನೆ ನೆನೆದು, ಎಲ್ಲಮಂ ಮರೆದಿಲ್ಲ ತವಸಿ.
ಅರಿಪಿಲ್ಲದಿಲ್ಲ ನಿನಗೆ—ನಾನಿಂದು ಗೆಯ್ದಿಹುದು.
ಪೂಣ್ಕೆ ಪೂರ್ಣತೆವಡೆಯೆ, ಅಯ್ಯಂಗೆ ಸಂಸ್ಕರಿಸಿ,
ಸಕಲಲೋಕವನೆರೆದೆ ಸತ್ಪಾತ್ರಗಳಿಗೆ:
ಪೂರ್ವದಿಗ್ರಾಜ್ಯಂ ಹೋತೃಗಳ್ಗೆ!
ಬ್ರಹ್ಮರ್ಗೆ ದಕ್ಷಿಣಂ! ಚರಮವಧ್ವರ್ಯುಗಳ್ಗೆ!
ಉದ್ಗಾತೃಗಳ್ಗುತ್ತರಂ! ಉಪದೃಷ್ಟೃವಿಂಗಾರ್ಯಾವರ್ತಂ!
ಮಿಕ್ಕ ನೆಲನೆಲ್ಲಂ ನಿನಗೆ—ಕಶ್ಯಪ!
ಇದಕಿಂತ ಬೇಕೇನು? ಮೇಲೆ ತಪಕಿಳಿವೆನಾನು—
ಮಡಿದಯ್ಯನಾತ್ಮಶಾಂತ್ಯರ್ಥಂ!
ನಾಗೆಯ್ದ ದುರಿತಕ್ಷಯಾರ್ಥಂ!

**ಕಶ್ಯಪ**

ಆದೊಡಂ, ಭಾರ್ಗವ, ನೀನಿರ್ಪವರಮಾರುಂ
ಮನಮಿಡರು ಲೋಕಪಾಲನೆಗೆಂದು.

**ಪರಶುರಾಮ**

ಅದೆಂತು ?

**ಕಶ್ಯಪ**

ಭಾರ್ಗವನ ಕೆರಳು ಕೊಡಲಿಗಳೆಂದರಿಳೆಯೆ ಬೆದರುವುದು.

**ಪರಶುರಾಮ**

ಅಂತೇಸು ! ಎನ್ನ ಹರಣದ ಜೋಡಿಯೀ ಕೊಡಲಿ-
ಯಾದೊಡಂ, ಒಡವುಟ್ಟಿ ಒಡಬೆಳೆದುದಾದೊಡಂ,
ಎದೆಮಿಡುಕದಿಂದಿಡುವೆನಿದರ ಸಹವಾಸಮಂ.
ಕ್ಷಾತ್ರಕೆದುರೆತ್ತಿದೆನು ಲೋಕ ಕಲ್ಯಾಣಕ್ಕೆ.
ಮತ್ತಿದನೆ ತೊರೆಯುವೆನು ಲೋಕ ಕಲ್ಯಾಣಕ್ಕೆ.

[ಎಂದಾಡಿ **ಕೊಡಲಿಯನು** ಮುಡುಗಿಡುವನು.]

**ಕಶ್ಯಪ**

ಒಳ್ಳಿತ್ತು ಭಾರ್ಗವ. ಮರಳಿಹುದು ಸ್ಥೈರಣೆಯು.
ರೋಸ ನಿಮ್ಮಲು ಮೋಸ. ಕೆರಳು ನಾಶದ ಕರುಳು.
ಭಾರ್ಗವ, ದೋಷಿಯರ್ಜುನನೊಡನೆ ನಿರ್ದೋಷಿ-
ಗಳನೆನಿಸಿತೊ ಭೂಭುಜರ ಸದೆದಿರುವೆಯದರಿಂದ,
ಕಿನಿಸನೊಂದನೆ ನಿಮ್ಮ ಸದೆದಿರುವೆಯದರಿಂದ,
ಕೊಡಲಿಯಿರದಿರ್ದೊಡಂ ಕೆರಳನೊಂದನೆ ಕಂಡು
ಹೊರಳುವುದು ಭೂಚಕ್ರಮೆಲ್ಲಂ. ಅಲ್ಲದೆಯು
ಇಳೆಯೆಲ್ಲಮಂ ನೀನೆ ದಾನವಿತ್ತಿಹೆಯಾಗಿ
ನಿನಗಿಲ್ಲಿ ನಿಲಲಿಲ್ಲಿ ತಾವಿಲ್ಲ. ಕಂಡೆಯಾ ?

**ಪರಶುರಾಮ**

ಕಶ್ಯಪ ! ನನಗಿಲ್ಲಿ ನಿಲಲಿಲ್ಲ ತಾವಿಲ್ಲ !

**ಕಶ್ಯಪ**

ದಾನವಿತ್ತುದನವನೆ ಉಣಲು ಬಹುದಲ್ಲ.

**ಪರಶುರಾಮ**

ಅಂತಿದ್ದಡೆನಗಾವುದೆಡೆಯೊ ?

**ಕಶ್ಯಪ**

ತಪಸಿಂಗೆ

ತಾಣವಾ ಕುಲಗಿರಿಗಳಲ್ಲಿಯ ಮಹೇಂದ್ರ
ವೊಂದೆಡೆಯು, ಶಾಶ್ವತದ ಶಾಂತಿ ಜನಿಸಿದ ಎಡೆಯು.

**ಪರಶುರಾಮ**

ನಾನಲ್ಲಿಗಡಿಯೆತ್ತಬೇಕೆ ?

**ಕಶ್ಯಪ**

ಹೊರತಿಲ್ಲ,

ಉಳಿದೆಲ್ಲ ನೆಲವೆಲ್ಲ ದಾನವಿತ್ತಿಹೆಯಾಗಿ.
ಇಂದಿಸಿರುಳಿಳಿವ ಮುನ್ನಡಿಯೆತ್ತಬೇಕು.

**ಪರಶುರಾಮ**

ತಾಯ್ನಾಡನುಳಿದು ?

**ಕಶ್ಯಪ**

ದಾನವಿತ್ತಿಹೆಯಾಗಿ.

**ಪರಶುರಾಮ**

ತವರೂರ ತೊರೆದು ?

**ಕಶ್ಯಪ**

ದಾನವಿತ್ತಿಹೆಯಾಗಿ.

**ಪರಶುರಾಮ**

ಇಂದೊಂದು ಸಂಜೆ ?

**ಕಶ್ಯಪ**

ನುಡಿಯೊಡೆಯುದಾಗಿ.

**ಪರಶುರಾಮ**

ಇಂದೊಂದು ಸಂಜೆ !

**ಕಶ್ಯಪ**

ನೋಡಲ್ಲಿ ! ಅರ್ಕನುರ್ಕುಡುಗಿತ್ತು

ಪಶ್ಚಿಮಾಂಗನೆಯಂಗಸಂಗದೊಳು ಬಿದ್ದು.

**ಪರಶುರಾಮ**

ಇಂದೊಂದು ಸಂಜೆ ! ಕಶ್ಯಪ ! ಇಂದೊಂದು ಸಂಜೆ !

**ಕಶ್ಯಪ**

ಪೊಳ್ತಿಲ್ಲದಾಯ್ತು ! ಅಸ್ತಮಯಮಾಯ್ತು !

**ಪರಶುರಾಮ**

ಅಸ್ತಮಯಮಾಯ್ತು ! ಅಸ್ತಮಯಮಾಯ್ತು !

[ಎಂದಡಿಯನೆತ್ತುತಿರೆ ತೆರೆಯಿಳಿವುದು ]

---

PRINTED AT THE WESLEYAN MISSION PRESS, MYSORE CITY